# ಕರ್ನಾಟಕ ವಿಧಾನಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 769
ಸದಸ್ಯರ ಹೆಸರು : ಶ್ರೀ ಆರ್. ಧರ್ಮಸೇನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 25-09-2020.
ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ, ಯುವಜನ ಸಬಲೀಕರಣ ಹಾಗೂ ಕ್ರೀಡಾ ಇಲಾಖೆ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| 1. | ಕನ್ನಡ ಮತ್ತು ಸಂಸ್ಕೃತಿ ಇಲಾಖೆ ವತಿಯಿಂದ ಮೈಸೂರು ಜಿಲ್ಲೆ ಟಿ. ನರಸೀಪುರದಲ್ಲಿ ಸಾಂಸ್ಕೃತಿಕ ಭವನ ನಿರ್ಮಾಣ ಮಾಡಲು ಈಗಾಗಲೇ 10 ಲಕ್ಷ ರೂಪಾಯಿ ಮಂಜೂರಾಗಿದ್ದು, ಯಾವಾಗ ಸಾಂಸ್ಕೃತಿಕ ಭವನ ನಿರ್ಮಿಸಲಾಗುವುದು; | ಮೈಸೂರು ಜಿಲ್ಲೆ ಟಿ. ನರಸೀಪುರ ತಾಲ್ಲೂಕು, ಗೋಪಾಲಪುರ ಗ್ರಾಮದಲ್ಲಿ ಸಾಂಸ್ಕೃತಿಕ ಭವನ ನಿರ್ಮಾಣ ಮಾಡಲು 2010-11ನೇ ಸಾಲಿನಲ್ಲಿ ರೂ.10.00ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ. |
| 2. | ಸಾಂಸ್ಕೃತಿಕ , ಭವನ ನಿರ್ಮಿಸಲು ಪುರಸಭೆಯಿಂದ ಜಾಗ ಮಂಜೂರಾಗಿದೆಯೇ; ಈ ವಿಚಾರ ಯಾವ ಹಂತದಲ್ಲಿದೆ; | ಟಿ. ನರಸೀಪುರ ಪುರಸಭೆಯಿಂದ ದಿನಾಂಕ: 20-08-2011ರಲ್ಲಿ ಜಿಲ್ಲಾ ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಮೈಸೂರು ಇವರಿಗೆ ಪತ್ರ ಬರೆದು ಸಾಂಸ್ಕೃತಿಕ ಕಟ್ಟಡ ನಿರ್ಮಿಸಲು ಅವಶ್ಯವಿರುವ ನಿವೇಶನ-ಅಳತೆ ಬಗ್ಗೆ ಮಾಹಿತಿ ನೀಡಲು ಕೋರಿದ್ದು, ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಮೈಸೂರು ಇವರು ದಿನಾಂಕ:02-09-2011ರ ಪತ್ರದಲ್ಲಿ ಮುಖ್ಯ ಅಧಿಕಾರಿಗಳು, ಪಟ್ಟಣ ಪಂಚಾಯಿತಿ ಕಾರ್ಯಾಲಯ, ಟಿ.ನರಸೀಪುರ, ಮೈಸೂರು ಜಿಲ್ಲೆ, ಇವರಿಗೆ 80X120 ಅಳತೆಯ ನಿವೇಶನವನ್ನು ಆಯ್ಕೆ ಮಾಡಿ ಇಲಾಖೆಗೆ ಹಸ್ತಾಂತರಿಸಲು ಕೋರಿದ್ದಾರೆ. ಸಾಂಸ್ಕೃತಿಕ ಭವನ ನಿರ್ಮಾಣಕ್ಕೆ ಪುರಸಭೆಯವರು ಯಾವುದೇ ಸ್ಥಳವನ್ನು ಈವರೆಗೂ ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಮೈಸೂರು ಇವರಿಗೆ ನಿವೇಶನ ಗುರುತಿಸಿ ನೀಡಿರುವುದಿಲ್ಲ.<br>ನಿವೇಶನ ಲಭ್ಯವಿಲ್ಲದೇ ಇರುವುದರಿಂದ, ಸದರಿ ಸಾಂಸ್ಕೃತಿಕ ಭವನಕ್ಕೆ ಬಿಡುಗಡೆ ಮಾಡಿದ ಅನುದಾನ ರೂ.10.00 ಲಕ್ಷಗಳನ್ನು ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರು ದಿನಾ೦ಕ 31.05.2014 ರ೦ದು ಸರ್ಕಾರಕ್ಕೆ ಜಮೆ ಮಾಡಿರುತ್ತಾರೆ. |
| 3. | ಸಾಂಸ್ಕೃತಿಕ ಭವನ ಯಾವಾಗ ನಿರ್ಮಿಸಲಾಗುವುದು? | ಪುರಸಭೆಯಿಂದ ಸಾಂಸ್ಕೃತಿಕ ಭವನ ನಿರ್ಮಾಣಕ್ಕಾಗಿ ನಿವೇಶನವನ್ನು ಕಾಯ್ದಿರಿಸಿದಲ್ಲಿ, ಅನುದಾನದ ಲಭ್ಯತೆಯನುಸಾರ ಸಾಂಸ್ಕೃತಿಕ ಭವನ ನಿರ್ಮಾಣದ ಬಗ್ಗೆ ಪರಿಶೀಲಿಸಲಾಗುವುದು. |

ಕಸಂಪಾ 85 ಕವಿಸ 2020

(ಸಿ.ಟಿ.ರವಿ)
ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ,
ಯುವ ಸಬಲೀಕರಣ ಹಾಗೂ ಕ್ರೀಡಾ ಇಲಾಖೆ ಸಚಿವರು